


# ಜ್ಯೋತಿಷ ಮಿತ್ರ

ಆನ್‌ಲೈನ್ ದಿನಪತ್ರಿಕೆ

www.jyothishamithra.com

**ಸಂಚಿಕೆ : 1012 03-06-2021 ಗುರುವಾರ**

ಪ್ಲವಸಂವತ್ಸರ ಉತ್ತರಾಯಣ ವಸಂತಋತು
ವೈಶಾಖಮಾಸ ಕೃಷ್ಣಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ನವಮಿ (ಗಂಟೆ 26.21ರ ವರೆಗೆ)<br>ನಕ್ಷತ್ರ : ಪೂರ್ವಾಭಾದ್ರಾ (ಗಂಟೆ 18.34ರ ವರೆಗೆ)<br>ರಾಹುಕಾಲ : (ಗಂಟೆ 02.05 PM - 03.41 PM ವರೆಗೆ)<br>ಗುಳಿಕಕಾಲ : (ಗಂಟೆ 09.16 AM - 10.52 AM ವರೆಗೆ) | ಸಕಾಲಕ್ಕೆ ಯಾವಾತನಿಗೆ ತಿಳಿವಳಿಕೆ ಬರುತ್ತದೋ ಆತನೇ ನಿಜವಾದ ಜ್ಞಾನಿ. |

# ಶನಿಯುತಿಯು ಫಲಾಫಲ



ಶನಿಗೆ ಬುಧ, ಶುಕ್ರ, ರಾಹು ಮಿತ್ರರು; ಗುರು ಸಮನು; ರವಿ, ಚಂದ್ರ, ಕುಜ, ಕೇತು ಶತ್ರುಗಳು. ಶನಿಯೊಂದಿಗೆ ಇತರ ಗ್ರಹಗಳು ಸೇರಿದಾಗ ಉಂಟಾಗುವ ಫಲಾಫಲಗಳನ್ನು ನೋಡೋಣ.

**ಶನಿಯೊಂದಿಗೆ ರವಿ :** ಈ ಜಾತಕನ ತಂದೆಯು ಕಷ್ಟದಿಂದ ಮುಂದೆ ಬಂದವನು ಹಾಗೂ ಇವರ ತಂದೆಯ ಸೋದರಾಂಶ ಒಬ್ಬರು ಸರಕಾರದಿಂದ ಸಹಕಾರ ಪಡೆಯುವರು. ಈ ಜಾತಕನು ಅನೇಕ ಶತ್ರುಗಳನ್ನು ಎದುರಿಸಬೇಕು. ಈ ಜಾತಕನ ಪುತ್ರನು ಮೊದಲು ಸೋಮಾರಿತನ, ನೀಚರ ಸಹವಾಸ ಇವುಗಳನ್ನು ಹೊಂದಿದ್ದು ತದನಂತರ ಅಭಿವೃದ್ಧಿಗೆ ಬಂದವನು. ತಂದೆ ಮಕ್ಕಳು ಒಂದೇ ಕಡೆ ಇದ್ದಾಗ ಆಗಾಗ್ಗೆ ವಿರಸವು ಸಂಭವಿಸುತ್ತಿರುತ್ತದೆ.

**ಶನಿಯೊಂದಿಗೆ ಚಂದ್ರ :** ಈ ಜಾತಕನು ಸಂಚರಿಸಿ ಜೀವನ ಮಾಡುವನು. ಈತನ ತಾಯಿಗೆ ಕಫ, ವಾತದ ತೊಂದರೆ ಇರುತ್ತದೆ. ಈತನಿಗೆ ಎಷ್ಟು ದವ್ಯ ಬಂದರೂ ಅಷ್ಟೇ ವ್ಯಯವಾಗುತ್ತದೆ. ವೃತ್ತಿಯಲ್ಲಿ ಆಗಾಗ್ಗೆ ಅಪವಾದ ನಿಂದನೆಗಳು ಬರುತ್ತಿರುತ್ತವೆ. ಈತನ ಕುಟುಂಬದಲ್ಲಿ ಆಗಾಗ್ಗೆ ಅಶಾಂತಿಯುಂಟಾಗುತ್ತದೆ.

ಈತನು ಊಟ ಮತ್ತು ನಿದ್ರೆಯಲ್ಲಿ ಅತಿಯಾದ ಪ್ರೀತಿಯನ್ನು ಹೊಂದಿರುತ್ತಾನೆ.

**ಶನಿಯೊಂದಿಗೆ ಕುಜ :** ಈತನ ಸೋದರನೊಬ್ಬನು ಅನೇಕ ಕಷ್ಟ ಶತೃತ್ವಗಳನ್ನು ಎದುರಿಸಬೇಕು. ಯಾವ ವೃತ್ತಿಯನ್ನೇ ಅವಲಂಬಿಸಿದರೂ ಅದು ಯಂತ್ರ ಸಂಬಂಧವಾದ ಶಾಖೆಯಾಗಿರುತ್ತದೆ. ವೃತ್ತಿಯಲ್ಲಿ ಬೇಸರ, ಭಂಗವು ಈ ಜಾತಕನಿಗೆ ಲಭಿಸುತ್ತದೆ. ಯಾವ ಒಂದು ವೃತ್ತಿಯನ್ನು ಅನುಸರಿಸಿದರೂ ಒಂದಲ್ಲಾ ಒಂದು ರೀತಿಯ ಭಂಗಗಳು ತಪ್ಪದೇ ಬರುತ್ತವೆ. ಈತನ ಹಿಂದೆ ಅನೇಕ ಶತೃಗಳು ಇರುತ್ತಾರೆ.

**ಶನಿಯೊಂದಿಗೆ ಬುಧ :** ಈ ಜಾತಕನು ಯಾವ ವಿಷಯಗಳನ್ನು ತಕ್ಷಣ ಹೊರಬಿಂಬಿಸುವುದಿಲ್ಲ. ಬುದ್ಧಿವಂತನಾದರೂ ನೋಡಿದವರಿಗೆ ಮಾತ್ರ ಮಂಕುಮಂಕಾಗಿರುತ್ತಾನೆ. ಈತನಿಗೆ ಒಂದು

ವಿಷಯವನ್ನು ನಾಲ್ಕುಬಾರಿ ಹೇಳಬೇಕು. ಅಂದರೆ ನಿಧಾನವಾಗಿ ವಿದ್ಯಾಪಾಂಡಿತ್ಯ ಗಳಿಸುವನು. ನಿಧಾನವಾಗಿ ವ್ಯವಹಾರಗಳಲ್ಲಿ ಮುಂದೆ ಬರುವರು. ವಿದ್ಯಾಭ್ಯಾಸದ ಸಂದರ್ಭದಲ್ಲಿ ಅನೇಕ ಸಮಸ್ಯೆಗಳು ಎದುರಿಸಬೇಕಾಗುತ್ತದೆ.

ಶನಿಯೊಂದಿಗೆ ಗುರು : ಈ ಜಾತಕನು ಯಾವ ವೃತ್ತಿಯನ್ನೇ ಮಾಡಿದರೂ ಪಭುತ್ವವನ್ನು ಪಡೆಯುವನು. ಪಾರಂಭದಲ್ಲಿ ಸಾಧಾರಣ ಬುದ್ಧಿವಂತನಾಗಿದ್ದರೂ ಕೆಲವೇ ವರ್ಷಗಳು ಕಳೆಯುತ್ತಿದ್ದಂತೆ ಹೆಸರು ವಾಸಿಯಾದ ವ್ಯಕ್ತಿಯಾಗುವರು. ಈ ಎರಡು ಗ್ರಹ ಸಂಯೋಗ ಇರುವವರು ವಿದ್ಯಾಗುರು, ವೈದ್ಯರು, ಮತೀಯ ಗುರು, ನ್ಯಾಯಮೂರ್ತಿಗಳು... ಇಂತಹ ಗುರುವಿನ ಪೀಠವನ್ನು ಅಲಂಕರಿಸುವರು. ಇವರ ಮಾತಿಗೆ ಎಲ್ಲೆಡೆಯಲ್ಲಿಯೂ ಗೌರವವಿರುತ್ತದೆ. ಇವರು ವಿದ್ಯೆ ಕಲಿಯದಿದ್ದರೂ ಹತ್ತಾರು ಜನರನ್ನು ಕೈಕೆಳಗೆ

ಇಟ್ಟುಕೊಂಡು ಕೆಲಸ ಮಾಡಿಸುವರು.



**ಶನಿಯೊಂದಿಗೆ ಶುಕ್ರ :** ಈ ಜಾತಕನು ದವ್ಯ ಸಂಬಂಧ ವ್ಯವಹಾರ ಸಂಸ್ಥೆಯಲ್ಲಿ ಜೀವನ ಸಾಗಿಸುವನು

ಅಥವಾ ವೈಭವಸಂಬಂಧ ವ್ಯಾಪಾರ ವ್ಯವಹಾರಗಳಲ್ಲಿ ಲಾಭ. ಈತನ ಪತ್ನಿಗೆ ಒಂದಲ್ಲಾ ಒಂದು ರೀತಿಯ ಸಂಪಾದನೆ ಇರುತ್ತದೆ. ಈ ಜಾತಕನಿಗೆ ವಿವಾಹದ ನಂತರವೇ ಭಾಗ್ಯವೃದ್ಧಿಯೂ, ಗೃಹಲಾಭಾದಿಗಳು ಲಭಿಸುತ್ತವೆ. ಸ್ತ್ರೀ ಜಾತಕವಾದರೆ ಆಕೆಗೆ ಯಾವುದೋ ಒಂದು ರೀತಿಯ ವೃತ್ತಿಯೂ ಲಭಿಸುತ್ತದೆ.

**ಶನಿಯೊಂದಿಗೆ ರಾಹು :** ವೃತ್ತಿಕಾರಕನಾದ ಶನಿಯೊಡನೆ ಮಾಯಾಕಾರಕನಾದ ರಾಹುವು ಸೇರಿದ್ದರೆ ಹುಟ್ಟಿದ ಊರಿನಿಂದ ದೂರದಲ್ಲಿ ಉದ್ಯೋಗ ಲಭಿಸುವುದು. ಮಾಡುವ ವೃತ್ತಿಯಲ್ಲಿ ಅಪವಾದಗಳು ಬರುತ್ತಿರುತ್ತದೆ. ಛಾಯಾಸಂಸ್ಥೆ, ಚಲನಚಿತ್ರ, ವೈದ್ಯ ವೃತ್ತಿ, ಜ್ಯೋತಿಷ ಮುಂತಾದ ವೃತ್ತಿಗಳಲ್ಲಿ ಅಭಿವೃದ್ಧಿಯನ್ನು ಹೊಂದುತ್ತಾರೆ. ಈ ಜಾತಕನು ಗುಪ್ತವಾಗಿ ದವ್ಯ ಶೇಖರಿಸುವನು.

**ಶನಿಯೊಂದಿಗೆ ಕೇತು :** ಈ ಜಾತಕನು ಯಾವ ವೃತ್ತಿಯನ್ನು ಮಾಡಲು ಹೊರಟರೂ ಅದಕ್ಕೆ ಒಂದಲ್ಲ ಒಂದು ರೀತಿ ಅಡಚಣೆಗಳು ಇದ್ದೇ ಇರುತ್ತದೆ. ಅನಗತ್ಯವಾಗಿ ವೃತ್ತಿಯಲ್ಲಿ ನಿಂದನೆ, ಅಪವಾದಗಳನ್ನು ಕೇಳಬೇಕಾಗುತ್ತದೆ. ಆಧ್ಯಾತ್ಮದಲ್ಲಿ ಒಲವಿರುವ ಇವರಿಗೆ ವೈರಾಗ್ಯ ಭಾವ ಮೂಡುವುದು. ವೈದ್ಯ ವೃತ್ತಿ, ಧಾರ್ಮಿಕ ಗುರು, ವಿದೇಶದಲ್ಲಿ ವೃತ್ತಿ, ಮಂತ್ರವಾದ, ಜ್ಯೋತಿಷ ವೃತ್ತಿಗಳಲ್ಲಿ ಯಶಸ್ಸು ಉಂಟಾಗುತ್ತದೆ.



# ಜನ್ಮ ಕುಂಡಲಿಯಲ್ಲಿ ರಾಹು ಗ್ರಹದ ಪ್ರಭಾವ

ಜನ್ಮ ಕುಂಡಲಿಯ ಎಂಟನೇ ಅಥವಾ ಹನ್ನೆರಡನೇ ಮನೆಯಲ್ಲಿ ರಾಹುವನ್ನು ಪಾಪಗ್ರಹ ದೃಷ್ಟನಾದರೆ ತನ್ನ ಮಹಾದಶೆ ಅಥವಾ ಅಂತರ್ ದೆಶೆಯಲ್ಲಿ ಕಳ್ಳತನ ಆಗಿ ನಷ್ಟ, ವೃಣಾದಿ ಆರೋಗ್ಯ ಹಾನಿ ಹಾಗೂ ಸರ್ಕಾರಿ ಕಾರ್ಯಾಲಯಗಳಲ್ಲಿ ಅಧಿಕಾರಿಗಳಿಂದ ವೈರತ್ವ, ನೆಂಟರಿಷ್ಟರು ಹಾಗೂ ಬಂಧುಗಳೊಂದಿಗೆ ಜಗಳ, ಹೆಂಡತಿಯೊಂದಿಗೆ ವಿರಸ, ಮಕ್ಕಳೊಂದಿಗೆ ಮನಸ್ತಾಪ ಇತ್ಯಾದಿ ತೊಂದರೆಗಳನ್ನು ನೀಡುತ್ತಾನೆ.

ರಾಹು ದೆಶೆಯಲ್ಲಿ ರಾಹು ಜಾತಕದಲ್ಲಿ ದೋಷಪ್ರದನಾಗಿದ್ದರೆ ನ್ಯಾಯಾಲಯಗಳಿಗೆ ಅಲೆದಾಟವನ್ನೂ ಉಂಟುಮಾಡುತ್ತಾನೆ. ಇದೇ ರಾಹು ವಿದೇಶಪ್ರಯಾಣ ಕಾರಕನೂ ಆಗಿರುವುದರಿಂದ ಜಾತಕದಲ್ಲಿ ಹತ್ತನೇ ಮನೆಯಲ್ಲಿ ಇದ್ದರೆ ಉದ್ಯೋಗ ನಿಮಿತ್ತ ಹತ್ತಾರು ಸ್ಥಳಗಳಿಗೆ ಪ್ರಯಾಣ ಮಾಡುವ ಯೋಗ ಕೂಡಿಬರುತ್ತದೆ.

ವಿದೇಶ ಪ್ರಯಾಣ ಯೋಗದಲ್ಲಿ ರಾಹು ಬಹಳ ಪ್ರಮುಖ ಪಾತ್ರ ವಹಿಸುತ್ತಾನೆ. ಉತ್ತಮ ವಿದ್ಯಾರ್ಹತೆ ಅನುಭವ ಎರಡೂ ಇದ್ದರೂ ಜಾತಕದಲ್ಲಿ ರಾಹುವಿನ ಬಲದ ಕೊರತೆ ಯಿಂದಾಗಿ ಎಷ್ಟೋ ಜನ ವಿದೇಶಕ್ಕೆ ಹೋಗಲಾಗದೆ ಇಲ್ಲೇ ಸಿಕ್ಕ ಚಿಕ್ಕ ಕೆಲಸ ಹಾಗೂ ಕಡಿಮೆ ಸಂಬಳಕ್ಕೆ ತೃಪ್ತಿ ಪಡಬೇಕಾಗಿದೆ. ಇನ್ನು



ಮುಖ್ಯವಾಗಿ ಗಮನಿಸಲೇಬೇಕಾದ ಅಂಶ ಎಂದರೆ ಭೂಮಿಯಲ್ಲಿ ರಾಹುನಡೆ ಯಾವ ಜಾಗದಲ್ಲಿ ಇರುತ್ತದೆಯೋ ಅಂಥ ಸ್ಥಳ ವಾಸಕ್ಕೆ ಯೋಗ್ಯ



ಇರುವುದಿಲ್ಲ. ಅಷ್ಟೇ ಅಲ್ಲದೆ ಅದನ್ನು ಖರೀದಿಸಿದವರಿಗೆ ಆ ಜಾಗದಲ್ಲಿ ಮನೆ ಕಟ್ಟಲೂ ಆಗುವುದಿಲ್ಲ ಅಥವಾ ಅದನ್ನು ಮಾರುವುದಕ್ಕೂ ಆಗುವುದಿಲ್ಲ ಅದೇ ರಾಹು ನಡೆ ದೋಷ ಹೆಚ್ಚು ಇದ್ದರೆ ಆ ಜಾಗ ವ್ಯಾಜ್ಯದಲ್ಲಿ ಸಿಕ್ಕಿ ಅದನ್ನು ಪಡೆಯಲು ನ್ಯಾಯಾಲಯದ ಕದ ತಟ್ಟುವಂತೆ ಮಾಡುತ್ತದೆ.

ಇನ್ನು ರಾಹುದೆಶೆ ಬರಬೇಕಾದರೆ ಕುಜದೆಶೆ ಮುಗಿದ ನಂತರವೇ. ಆದ್ದರಿಂದ ಅಲ್ಲಿ ಕುಜ-ರಾಹು ಸಂಧಿ ದೋಷ ಉಂಟಾಗುತ್ತದೆ. ಮೊದಲೇ ತಿಳಿದು ಶಾಂತಿ ಹವನ ಕರ್ಮಗಳನ್ನು ಮಾಡಿಸದೇ ಇದ್ದ ಪಕ್ಷದಲ್ಲಿ ರಾಹು ದೆಶೆಯ

ಪ್ರಾರಂಭದಲ್ಲಿಯೇ ರಸ್ತೆ ಅಪಘಾತ ಅಥವಾ ಅಗ್ನಿ ಅನಾಹುತ ಆಗುವ ಸಂಭವ ಇರುತ್ತದೆ. ತನ್ನ ದಶಾಕಾಲ ಪ್ರಾರಂಭವಾದ ನಂತರ ಹದಿನೆಂಟು ವರ್ಷ ಇರುವ ರಾಹು ತನ್ನ ದಶಾಕಾಲದ ಆರಂಭದಲ್ಲಿ ನೋಡಲು ತೆಳ್ಳಗೆ ಸಣ್ಣಗೆ ಇರುವವರನ್ನು ಕೇವಲ ಎರಡು ಮೂರು ವರ್ಷಗಳಲ್ಲಿ ದಪ್ಪಗಾಗಿಸಿ ಬಿಡುತ್ತಾನೆ. ನಂತರ ತನ್ನ ದಶಾ ಕಾಲದಲ್ಲಿ ಅತ್ಯಂತ ಹೆಚ್ಚು ಹಣ ಖರ್ಚು ಮಾಡಿಸುವ ರಾಹು, ವೃಥಾ ಪ್ರಯಾಣವನ್ನೂ ಹೆಚ್ಚಿಸುತ್ತಾನೆ.

**ಪರಿಹಾರ :** ರಾಹು ಗ್ರಹದ ದೋಷದಿಂದಾಗಿ ಕಷ್ಟ ಪಡುವ ಜನರು ಪರಿಹಾರಕ್ಕೆ ರಾಹು ಮಂತ್ರ ಜಪ, ತರ್ಪಣ ಹಾಗೂ ಶಾಂತಿ ಹವನ ಮಾಡಿಸಬಹುದು. ರಾಹುಕಾಲದಲ್ಲಿ ದುರ್ಗಾದೇವಿಗೆ ನಿಂಬೆ ದೀಪ ಹಚ್ಚುವುದು ಮಾಡಬಹುದು. ಇನ್ನು ಮಠಗಳಲ್ಲಿ ವೇದ ವ್ಯಾಸಂಗ ಮಾಡುತ್ತಿರುವ ಬ್ರಹ್ಮಚಾರಿಗಳ ಆರಾಧನೆ,

ಅರಿಶಿನದಿಂದ ನಾಗನಿಗೆ ಅರ್ಚನೆ, ನಾಗಪ್ರತಿಷ್ಠೆ ಇತ್ಯಾದಿಗಳಿಂದಲ್ಲೂ ಸಹ ತಕ್ಕ ಮಟ್ಟಿಗೆ ರಾಹು ದೋಷದಿಂದ ಮುಕ್ತವಾಗಬಹುದು. ಆದರೆ, ಒದಗಿ ಬಂದಿರುವ ಸಮಸ್ಯೆಗೆ ಸರಿಯಾದ ಪರಿಹಾರ ತಿಳಿಯಲು ಜಾತಕದ ಪರಿಶೀಲನೆ ಅಥವಾ ಸ್ಥಳದಲ್ಲಿ ರಾಹು ನಡೆ ಇದ್ದಾಗ ಸ್ಥಳ ಪರೀಕ್ಷೆ ಅತ್ಯಗತ್ಯ.



ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ
ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com